ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1491<br>(ನಗರಾಭಿವೃದ್ಧಿ ಇಲಾಖೆಯಿಂದ ವರ್ಗಾವಣೆಗೊಂಡಿರುವ ಪ್ರಶ್ನೆ) |
| ಮಾನ್ಯ ಸದಸ್ಯರ ಹೆಸರು | ಶ್ರೀ ಪಿ.ಆರ್. ರಮೇಶ್<br>(ನಾಮನಿರ್ದೇಶನ ಹೊಂದಿದವರು) |
| ಉತ್ತರಿಸಬೇಕಾದ ದಿನಾಂಕ | 10.03.2022 |
| ಉತ್ತರಿಸುವ ಸಚಿವರು | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಕೆಂಗೇರಿ ಉಪನಗರದಲ್ಲಿ ಶಿರ್ಕೆ ವಸತಿ ಸಮುಚ್ಚಯ ನಿರ್ಮಾಣವಾದ ವರ್ಷ ಯಾವುದು: (ವಿವರ ನೀಡುವುದು) | ಕರ್ನಾಟಕ ಗೃಹ ಮಂಡಳಿ ವತಿಯಿಂದ ಕೆಂಗೇರಿ 3ನೇ ಹಂತದಲ್ಲಿ 2524 ಮನೆಗಳನ್ನು ಒಳಗೊಂಡ ಬಹುಮಹಡಿ ವಸತಿ ಸಮುಚ್ಚಯವನ್ನು 1995 ರಲ್ಲಿ ನಿರ್ಮಿಸಿ ಮನೆಗಳನ್ನು ಹಂಚಿಕೆ ಮಾಡಲಾಗಿರುತ್ತದೆ. ಹಂಚಿಕೆದಾರರು 1996 ರಿಂದ ಮನೆಗಳಲ್ಲಿ ವಾಸಿಸುತ್ತಿದ್ದಾರೆ. ಸದರಿ ಬಡಾವಣೆಯನ್ನು ದಿನಾಂಕ: 31.08.2001 ರಂದು ಮುಂದಿನ ನಿರ್ವಹಣೆಗಾಗಿ ಸ್ಥಳೀಯ ಸಂಸ್ಥೆಯಾದ ಕೆಂಗೇರಿ ಪುರಸಭೆಯ ಮುಖ್ಯಾಧಿಕಾರಿಗಳಿಗೆ ಹಸ್ತಾಂತರಿಸಲಾಗಿದೆ. ಹಾಲಿ ಸದರಿ ಪ್ರದೇಶವು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿದೆ. |
| ಆ | ಶಿರ್ಕೆ ವಸತಿ ಸಮುಚ್ಚಯ ನಿರ್ಮಾಣ ಮಾಡಿದ ಮೂಲ ಕಟ್ಟಡ ಸಮುಚ್ಚಯ ನಕ್ಷೆಗೂ ಪ್ರಸ್ತುತ ಕಟ್ಟಡ ಸಮುಚ್ಚಯ ನಕ್ಷೆಗೂ ಬದಲಾವಣೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು: (ವಿವರ ನೀಡುವುದು) | ಶಿರ್ಕೆ ವಸತಿ ಸಮುಚ್ಚಯ ನಿರ್ಮಾಣ ಮಾಡಿದ ಮೂಲ ಕಟ್ಟಡ ಸಮುಚ್ಚಯ ನಕ್ಷೆಗೂ ಮತ್ತು ಸ್ಥಳ ಸ್ಥಿತಿಯಂತೆ ಅಭಿವೃದ್ಧಿಪಡಿಸಲಾದ ಪ್ರಸ್ತುತ ವಸತಿ ಸಮುಚ್ಚಯ ನಕ್ಷೆಗೂ ಬದಲಾವಣೆಯಿದೆ. ಬಡಾವಣೆಯ ಯಥಾಸ್ಥಿತಿ ನಕ್ಷೆಯನ್ನು ತಯಾರಿಸಿ ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆಯಲು ಕ್ರಮ ವಹಿಸಲಾಗುತ್ತಿದೆ. |
| ಇ | ಶಿರ್ಕೆ ವಸತಿ ಸಮುಚ್ಚಯದ ಖಾಲಿ ಜಾಗದಲ್ಲಿ ಅನಧಿಕೃತವಾಗಿ ಕಾಂಪೌಂಡ್, ಗೋಡೆ, ಮನೆಗಳ ನಿರ್ಮಾಣವಾಗಿದ್ದು ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮವೇನು? (ವಿವರ ನೀಡುವುದು) | ಸದರಿ ಬಡಾವಣೆಯನ್ನು ಈಗಾಗಲೇ ಸ್ಥಳೀಯ ಸಂಸ್ಥೆಗೆ ಹಸ್ತಾಂತರ ಮಾಡಿರುವುದರಿಂದ, ಹಂಚಿಕೆಗೆ ಬಾಕಿ ಇರುವ ಸಾರ್ವಜನಿಕ ಸೌಲಭ್ಯ ನಿವೇಶನಗಳು ಹಾಗೂ ಮಾನ್ಯ ನ್ಯಾಯಾಲಯ ಪ್ರಕರಣಗಳು ಇರುವ ಜಮೀನು ಮಾತ್ರ ಮಂಡಳಿ ವಶದಲ್ಲಿದ್ದು, ಅದರಲ್ಲಿರುವ ಅನಧಿಕೃತ ನಿರ್ಮಾಣಗಳನ್ನು ತೆರವುಗೊಳಿಸಲು ಕ್ರಮವಹಿಸಲಾಗುತ್ತಿದೆ. |

(ಸಂಖ್ಯೆ: ವಇ 63 ಕಗೃಮಂ 2022)

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು.